# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 668
2. ಸದಸ್ಯರ ಹೆಸರು : ಶ್ರೀ ಅ.ದೇವೇಗೌಡ
3. ಉತ್ತರಿಸಬೇಕಾದ ದಿನಾಂಕ : 12-03-2020
4. ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ರಾಮನಗರ ಜಿಲ್ಲೆಯ ಮಾಗಡಿ ತಾಲ್ಲೂಕಿಗೆ ಹೇಮಾವತಿ ನದಿಯಿಂದ ನಾಲೆಯ ಮೂಲಕ ಕುಡಿಯುವ ನೀರನ್ನು ಹರಿಸುವ ಕಾಮಗಾರಿಯು ಪ್ರಸ್ತುತ ಯಾವ ಹಂತದಲ್ಲಿದೆ ; | ಪಂಪ್‌ಹೌಸ್ ಕಾಮಗಾರಿ ಬಹುತೇಕ ಪೂರ್ಣಗೊಂಡಿದ್ದು, ಪಂಪು ಮತ್ತು ಮೋಟಾರ್‌ಗಳ ಅಳವಡಿಕೆ ಕಾಮಗಾರಿ ಪೂರ್ಣಗೊಂಡಿರುತ್ತದೆ. ವಿದ್ಯುತ್ ಸಬ್ ಸ್ಟೇಷನ್‌ನ ಸಿವಿಲ್ ಕಾಮಗಾರಿ ಹಾಗೂ ರೈಸಿಂಗ್ ಮೇನ್‌ನ ಕಾಮಗಾರಿ ಪ್ರಗತಿಯಲ್ಲಿರುತ್ತದೆ. |
| ಆ | 2014 ರಲ್ಲಿ ಪ್ರಾರಂಭವಾದ ಈ ಕಾಮಗಾರಿಯು ವಿಳಂಬವಾಗುತ್ತಿದ್ದು, ಕಾಮಗಾರಿಯು ತ್ವರಿತವಾಗಿ ಪೂರ್ಣಗೊಳ್ಳಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು ; | ಸದರಿ ಯೋಜನೆಯ ಗ್ರಾವಿಟಿ ಮೈನ್‌ನಲ್ಲಿ ಪೈಪ್ ಬದಲಾವಣೆ ಹಾಗೂ ಪಥ ಬದಲಾವಣೆಯಿಂದಾಗಿ ಹೆಚ್ಚುವರಿ ಆರ್ಥಿಕ ಹೊರೆ ಉಂಟಾಗಿದ್ದು, ಪರಿಷ್ಕೃತ ಅಂದಾಜನ್ನು ಕಾವೇರಿ ನೀರಾವರಿ ನಿಗಮದಿಂದ ತಯಾರಿಸಲಾಗಿತ್ತು. ಆದರೆ ಈಗಾಗಲೇ ಅನುಮೋದಿಸಲಾದ ಕಾಮಗಾರಿಗಳ ಕಾರ್ಯಭಾರ ಅಧಿಕವಾಗಿರುವುದರಿಂದ ಕಾಮಗಾರಿಯನ್ನು ಕೈಗೆತ್ತಿಕೊಳ್ಳುವುದನ್ನು ಕೈಬಿಡುವಂತೆ ಆರ್ಥಿಕ ಇಲಾಖೆಯು ತಿಳಿಸಿದ್ದರಿಂದ, ಕಾಮಗಾರಿಯನ್ನು ಸ್ಥಗಿತಗೊಳಿಸಲಾಗಿದೆ.<br><br>ಭೂಸ್ವಾಧೀನ ಪ್ರಕ್ರಿಯೆ ಪೂರ್ಣಗೊಳಿಸಲು ಮತ್ತು ಪರಿಷ್ಕೃತ ಅಂದಾಜು ಪಟ್ಟಿಗೆ ಅನುಮೋದನೆ ನೀಡುವ ಪ್ರಸ್ತಾವನೆ ಪರಿಶೀಲನೆಯಲ್ಲಿದೆ. ಅನುಮೋದನೆ ದೊರೆತ ನಂತರ ಅನುದಾನದ ಲಭ್ಯತೆಗೆ ಅನುಗುಣವಾಗಿ ಅನುಷ್ಠಾನಗೊಳಿಸಲಾಗುವುದು. |
| ಇ | ಮಾಗಡಿ ತಾಲ್ಲೂಕಿನ ಜನತೆಗೆ ಕುಡಿಯುವ ನೀರಿನ ಬವಣೆ ಹೆಚ್ಚಾಗಿದ್ದು, ಹೇಮಾವತಿ ನದಿಯಿಂದ ನಾಲೆಯ ಮೂಲಕ ಹರಿಸುವ ಕುಡಿಯುವ ನೀರು ಕಾಮಗಾರಿಯು 2020 ರೊಳಗಾಗಿ ಪೂರ್ಣಗೊಳ್ಳುವ ನಿರೀಕ್ಷೆ ಇದೆಯೇ ? | |

***ಸಂಖ್ಯೆ:ಜಸಂಇ 22 ಎನ್‌ಎಲ್‌ಎ 2020***

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು